


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 09-03-2021 ಪ್ರಶ್ನೆ ಸಂಖ್ಯೆ : 704(872)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪ್ರಚಂದ್ರ ಶೆಟ್ಟಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 09-03-2021

ಉತ್ತರಿಸುವ ಸಚಿವರು: ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು

ವಿಷಯ : ರಾಜ್ಯದ ಕಟ್ಟಡ ಕಲ್ಲು ಗಣಿ, ಕ್ರಶರ್, ಎಮ್ ಸ್ಯಾಂಡ್ ಘಟಕಗಳ ಕುರಿತು

(ಅ) ರಾಜ್ಯದಲ್ಲಿರುವ ಕಟ್ಟಡ ಕಲ್ಲು ಗಣಿ (ಕ್ವಾರಿ), ಕಲ್ಲು ಪುಡಿ (ಕ್ರಶರ್) ಘಟಕ, ಎಮ್ ಸ್ಯಾಂಡ್ (M Sand) ಘಟಕಗಳ ಸಂಖ್ಯೆ ಎಷ್ಟು; (ಜಿಲ್ಲೆ, ತಾಲ್ಲೂಕುವಾರು ಘಟಕಗಳ ಹೆಸರು, ವಿಳಾಸ ಒದಗಿಸುವುದು) ಪ್ರತಿ ವರ್ಷ ಘಟಕಗಳು ಅವುಗಳ ಉತ್ಪಾದನಾ ಪ್ರಮಾಣ ಎಷ್ಟು;

(ಆ) ಈ ಘಟಕಗಳಿಗೆ ಅಗತ್ಯವಾದ ಕಚ್ಚಾ ಸಾಮಾಗ್ರಿಗಳು ಮತ್ತು ಮೂಲಭೂತ ಅವಶ್ಯಕತೆಗಳು ಯಾವುವು; ಇವುಗಳ ಸಂಗ್ರಹಣೆ ಮತ್ತು ಪೂರೈಕೆಯ ಮೇಲೆ ಸರ್ಕಾರದ ನಿಯಂತ್ರಣವೇನು; ಈ ಕುರಿತು ಸರ್ಕಾರದಿಂದ ಕೈಗೊಂಡ ಕ್ರಮಗಳು ಮತ್ತು ಸುತ್ತೋಲೆಯ ಆದೇಶದ ಪ್ರತಿಯನ್ನು ನೀಡುವುದು;

(ಇ) ಕಳೆದ 03 ವರ್ಷಗಳಲ್ಲಿ ಅಕ್ರಮ ಗಣಿಗಾರಿಕೆ ಹಾಗೂ ಮಾರ್ಗ ಸೂಚಿ ಮೀರಿ ಕಚ್ಚಾ ಮಾಲುಗಳ ಸಂಗ್ರಹದ ಕುರಿತು ದಾಖಲಾದ ಪ್ರಕರಣಗಳ ಸಂಖ್ಯೆ ಎಷ್ಟು? (ಜಿಲ್ಲಾವಾರು ಮತ್ತು ತಾಲ್ಲೂಕುವಾರು ಮಾಹಿತಿ ನೀಡುವುದು ಮತ್ತು ಈ ಗಣಿಗಾರಿಕೆ ಪ್ರದೇಶದಲ್ಲಿ ಸುರಕ್ಷತೆಯ ಕುರಿತು ಸರ್ಕಾರದಿಂದ ಹೊರಡಿಸಲಾದ ಮಾರ್ಗಸೂಚಿ ಸುತ್ತೋಲೆಯ ಪ್ರತಿಯನ್ನು ಒದಗಿಸುವುದು)